# ಕವನಗಳ ಮೂಲಕ ಕಲಿಕೆಯ ಬಲವರ್ಧನೆ

ಆಂಗ್ಲ ಮೂಲ: ಪ್ರಿಯಾ ಜಯಸ್ವಾಲ್

ನನ್ನೊಂದಿಗೆ ಕೆಲಸ ಮಾಡುವ ಶಿಕ್ಷಕರ ನಡುವೆ ಥೋರನ್ (ರಾಯಪುರ, ದೇಹರಾದೂನ್) ಗ್ರಾಮದ ಸರ್ಕಾರಿ ಪ್ರಾಥಮಿಕ ಶಾಲೆಯ ಮುಖ್ಯಶಿಕ್ಷಕಿ ಅಂಜಲಿ ಗುಪ್ತಾ ಸಹ ಒಬ್ಬರು. ಮಕ್ಕಳು ಯಾವುದೇ ವಿಷಯವನ್ನು ಕಥೆ, ಆಟ ಮತ್ತು ಪದ್ಯಗಳ ಮೂಲಕ ಒತ್ತಡರಹಿತವಾದ, ಅಧ್ಯಯನದ ಹೊರೆಯನ್ನು ಅನುಭವಿಸದ ಮುಕ್ತ ವಾತಾವರಣದಲ್ಲಿ ಶೀಘ್ರವಾಗಿ ಹಾಗೂ ಸುಲಭವಾಗಿ ಕಲಿಯಬಲ್ಲರು ಎಂಬುದು ಅವರ ನಂಬಿಕೆ. ಈ ಮೂಲಕ ಅವರು ಅಂತರವೈಯಕ್ತಿಕ ಸಂವಹನದ ಕೌಶಲಗಳನ್ನು ಹಾಗೂ ತಂಡದಲ್ಲಿ ಕೆಲಸಮಾಡಲು ಅಗತ್ಯವಿರುವ ಮನೋಧರ್ಮವನ್ನು ಬೆಳೆಸಿಕೊಳ್ಳುತ್ತಾರೆ.

ಎರಡು ದಶಕಗಳಿಗೂ ಮೀರಿದ ಬೋಧನೆಯ ಅನುಭವವಿರುವ ಅಂಜಲಿ ಗುಪ್ತಾ ಅವರು ಪದ್ಯಗಳನ್ನು ಕಟ್ಟಿ, ಅವುಗಳನ್ನು ಪಠ್ಯಪುಸ್ತಕದ ವಿಷಯಗಳಾದ ಕ್ರಿಯಾಪದಗಳು, ಮಗ್ಗಿ ಮತ್ತು ಎಣಿಕೆಗೆ ಬೆಸೆಯುತ್ತಾರೆ. ಸಂಚಾರಿ ನಿಯಮಗಳು, ದೇಹದ ಅಂಗಗಳು ಮತ್ತು ಅವುಗಳ ಕೆಲಸಗಳು, ರಾಷ್ಟ್ರೀಯ ಚಿಹ್ನೆಗಳು, ದಿನ ಹಾಗೂ ತಿಂಗಳುಗಳ ಹೆಸರುಗಳು, ನಾಮಪದಗಳು, ಸರ್ವನಾಮಗಳು, ಕ್ರಿಯಾಪದಗಳು, ವಿಶೇಷಣಗಳು, ವಿರುದ್ಧಪದಗಳು, ಸಮಾನಾರ್ಥಕ ಪದಗಳು, ಪ್ರಾಣಿ-ಪಕ್ಷಿಗಳ ಕೂಗು ಹಾಗು ಅವುಗಳ ಆಂಗ್ಲಭಾಷೆಯ ಹೆಸರುಗಳನ್ನು ಬೋಧಿಸಲು ಅವರು ಪದ್ಯಗಳನ್ನು ಬಳಸಿಕೊಳ್ಳುತ್ತಾರೆ.

ಬೆಳಗ್ಗಿನ ಪ್ರಾರ್ಥನಾಸಭೆಯಲ್ಲಿ ಚಿಕ್ಕ, ಆಸಕ್ತಿದಾಯಕ ಪ್ರಾಸಬದ್ಧ ಪದ್ಯಗಳನ್ನು ಹಾವಭಾವಗಳೊಂದಿಗೆ ಮಕ್ಕಳು ಹಾಡುವಂತೆ ಅವರು ನೋಡಿಕೊಳ್ಳುತ್ತಾರೆ. ಮಕ್ಕಳು ಪದ್ಯವೊಂದನ್ನು ಕರಗತ ಮಾಡಿಕೊಳ್ಳುತ್ತಿದ್ದಂತೆ ಅದನ್ನವರು ಕಪ್ಪುಹಲಗೆಯ ಮೇಲೆ ಬರೆದು, ಮಕ್ಕಳು ಸ್ವತಂತ್ರವಾಗಿ, ಪದಗಳ ಮೇಲೆ ಬೆರಳಾಡಿಸುತ್ತಾ ಓದುವುದನ್ನು ಅಭ್ಯಸಿಸಲು ನೆರವಾಗುತ್ತಾರೆ. ಈ ವಿಧಾನವನ್ನು ಮೇಲಿಂದ ಮೇಲೆ ಪ್ರಯೋಗಿಸುವ ಮಕ್ಕಳು ಸರಳ ಪದಗಳನ್ನು, ವಾಕ್ಯವೃಂದಗಳನ್ನು, ಕಥೆ ಹಾಗೂ ಪದ್ಯಗಳನ್ನು ಓದಲು ಹಾಗೂ ಬರೆಯಲು ತೊಡಗುತ್ತಾರೆ.

**ಹಿಂದಿ ಕಾಗುಣಿತವನ್ನು ಆಟದ ಮೂಲಕ ಅರ್ಥ ಮಾಡಿಕೊಳ್ಳುವುದು**

ಹಿಂದಿ ಕಾಗುಣಿತದ ಪರಿಚಯವಿರದ ಕಾರಣ ವಿದ್ಯಾರ್ಥಿಗಳಿಗೆ ಪದಗಳನ್ನು ಸರಿಯಾಗಿ ಉಚ್ಚರಿಸಲು ಹಾಗೂ ನಿರರ್ಗಳವಾಗಿ ಓದಲು ತೊಂದರೆ ಆಗುತ್ತಿದೆ ಎಂಬುದನ್ನು ಅಂಜಲಿ ಗುಪ್ತಾ ಅರಿತುಕೊಂಡರು. ಇದನ್ನು ಸರಿಪಡಿಸಲು, ಮಕ್ಕಳು ಕಾಗುಣಿತವನ್ನು ಸರಿಯಾಗಿ ಗ್ರಹಿಸಲಾಗುವಂತೆ ಅವರು ಬೋಧನಾ-ಕಲಿಕಾ ಸಾಮಗ್ರಿಗಳನ್ನು ಅಭಿವೃದ್ಧಿಗೊಳಿಸಿದ್ದೇ ಅಲ್ಲದೆ, ಹಲವು ವಿಧದ ಚಟುವಟಿಕೆಗಳನ್ನು ವಿನ್ಯಾಸಗೊಳಿಸಿದರು. ಉದಾಹರಣೆಗೆ, ಅವರು ಕಾಗುಣಿತದ ಕಿಟಕಿಯೊಂದನ್ನು ರಚಿಸಿ, ಮಕ್ಕಳು ಮಿಂಚುಪಟ್ಟಿಗಳನ್ನು (lashcards) ಬಳಸಿ ಯಾವುದೇ ಅಕ್ಷರವನ್ನು ಅದರಲ್ಲಿ ಜೋಡಿಸಿ, ಆ ಅಕ್ಷರವನ್ನು ಕಾಗುಣಿತದೊಂದಿಗೆ ಓದಲು ಸಾಧ್ಯವಾಗುವಂತೆ ಮಾಡಿದ್ದಾರೆ. ಹಲವು ಪದಗಳ, ಅಕ್ಷರಗಳ ಮತ್ತು ಕಾಗುಣಿತಗಳ ಮಿಂಚುಪಟ್ಟಿಗಳನ್ನು ಸಹ ಅವರು ಸಿದ್ಧಪಡಿಸಿ ಇಟ್ಟುಕೊಂಡಿದ್ದಾರೆ. ಕಾಗುಣಿತವನ್ನು

ಮಕ್ಕಳು ಗುರುತಿಸಲು ನೆರವಾಗುವಂತೆ ಅವರು ಮಕ್ಕಳಿಗೆ ಪದಗಳ ಮಿಂಚುಪಟ್ಟಿಗಳನ್ನು ನೀಡಿ, ಆ ಪದಗಳಲ್ಲಿ ಸೇರಿರುವ ಕಾಗುಣಿತಗಳ ಮಿಂಚುಪಟ್ಟಿಗಳನ್ನು ಹೆಕ್ಕಿ ತೆಗೆಯುವಂತೆ ಹೇಳುತ್ತಾರೆ. ಇದರ ಜೊತೆಗೆ, ಶಾಲೆಯ ಗೋಡೆಗಳಂತಹ ಕಲಿಕಾ-ಆವರಣದಲ್ಲಿ ಸೇರಿರುವ ಪದಗಳು, ಅವುಗಳಲ್ಲಿ ಕಂಡುಬರುವ ಕಾಗುಣಿತವನ್ನು ಮಕ್ಕಳು ಓದಲು, ಬರೆಯಲು ತೊಡಗುತ್ತಾರೆ.

ಮತ್ತೊಂದು ಚಟುವಟಿಕೆಯಲ್ಲಿ ಅವರು ಸೀಮೆಸುಣ್ಣ ಬಳಸಿ ನೆಲದ ಮೇಲೆ 'क' ಬರೆದು, ಬಳಿಕ ಅದು ವಿವಿಧ ಕಾಗುಣಿತಗಳಿಂದ ಸುತ್ತುವರಿಯುವಂತೆ ಮಾಡುತ್ತಾರೆ. ಇದಾದ ಮೇಲೆ, ಅವರು ಸ್ವರಪೂರ್ಣ ವ್ಯಂಜನವೊಂದನ್ನು (ಉದಾಹರಣೆಗೆ, 'को') ಉಚ್ಚರಿಸಿ, ಅದನ್ನು ಬರೆಯಲು ಯಾವ ಕಾಗುಣಿತದ ಅಗತ್ಯವಿದೆ ಎಂದು ಕೇಳುತ್ತಾರೆ. ವಿದ್ಯಾರ್ಥಿಗಳು ಥಟ್ಟನೆ ಉತ್ತರಿಸಬೇಕು. ವಿದ್ಯಾರ್ಥಿಗಳ ಕಾಗುಣಿತ ಜ್ಞಾನವು ಗಟ್ಟಿಗೊಳ್ಳಲು ಅವರು ಇಂತಹ ಹಲವು ಚಟುವಟಿಕೆಗಳಲ್ಲಿ ಮಕ್ಕಳನ್ನು ತೊಡಗಿಸುತ್ತಾರೆ. ಇದರಿಂದಾಗಿ, ಎರಡರಿಂದ ಐದನೇ ತರಗತಿಯ ಶೇಕಡಾ 75ರಷ್ಟು ಮಕ್ಕಳಿಗೆ ಕಾಗುಣಿತ ಜ್ಞಾನವು ಚೆನ್ನಾಗಿ ಗಟ್ಟಿಗೊಂಡಿದೆ. ಮಕ್ಕಳು ಈಗ ಮಾತನಾಡಲು, ಬರೆಯಲು ಹಾಗೂ ತಮ್ಮದೇ ವಾಕ್ಯಗಳನ್ನು ರಚಿಸಲು ಬಲ್ಲವರಾಗಿದ್ದಾರೆ. ಅವರು ಗ್ರಂಥಾಲಯದಲ್ಲಿರುವ ಸಣ್ಣ ಕಥೆಗಳನ್ನು ಕೂಡ ಓದುತ್ತಾರೆ.

ಪ್ರತಿನಿತ್ಯವೂ ಈ ಶಿಕ್ಷಕರು ಮಕ್ಕಳ ಬರವಣಿಗೆ ಹಾಗೂ ಆಲೋಚನಾಶಕ್ತಿಗಳನ್ನು ಬಲಪಡಿಸಲು ನೆರವಾಗುವಂತೆ ಐದು ವಿಭಿನ್ನ ವಸ್ತುಗಳ ಹೆಸರನ್ನು ಬರೆಯಲು ಪ್ರೋತ್ಸಾಹಿಸುತ್ತಾರೆ. ಇವು ಆಹಾರ ಪದಾರ್ಥಗಳು, ತರಕಾರಿಗಳು, ಸಾಕುಪ್ರಾಣಿ ಹಾಗೂ ಕಾಡುಪ್ರಾಣಿಗಳು, ಸಾರಿಗೆಯ ವಿಧಗಳು, ಶಾಲಾ ಚೀಲದಲ್ಲಿನ ವಸ್ತುಗಳು, ಆಭರಣಗಳು, ಬಟ್ಟೆ-ಬರೆ, ಕ್ರೀಡೆಗಳು, ಹೂಗಳು ಹಾಗೂ ಸ್ಥಳಗಳಾಗಿರಬಹುದು. ಇದರಲ್ಲಿ ಪಾಲ್ಗೊಳ್ಳಲು ಮಕ್ಕಳು ಅತಿ ಉತ್ಸುಕರಾಗಿರುತ್ತಾರೆ. ಪ್ರತಿಯೊಬ್ಬರೂ ಬರೆಯುವುದರಲ್ಲಿ ತಾವೇ ಮೊದಲಿಗರಾಗಲು ಬಯಸುತ್ತಾರೆ. ಇದಕ್ಕೆ ಪೂರಕವಾದ ಅಭ್ಯಾಸದ ರೂಪದಲ್ಲಿ ಈ ಶಿಕ್ಷಕರು ಮಕ್ಕಳ ನೆರವಿನಿಂದ ಹಲವು ವಸ್ತುಗಳನ್ನು ಸೂಚಿಸುವ ಕಾಗದದ ತುಣುಕುಗಳನ್ನು ತಯಾರಿಸಿ ಇಟ್ಟುಕೊಂಡಿದ್ದಾರೆ. ಅವರು ಅವನ್ನು ಚೆನ್ನಾಗಿ ಬೆರೆಸಿ, ಮಕ್ಕಳು ಹಣ್ಣಿನ ಹೆಸರು, ಸಾರಿಗೆ ವಿಧಗಳಂತಹ ಒಂದೇ ರೀತಿಯ ವಸ್ತುಗಳಿರುವ ಕಾಗದದ ತುಣುಕುಗಳನ್ನು ಬೇರ್ಪಡಿಸುವಂತೆ ಮಾಡುತ್ತಾರೆ. ಇದರಿಂದ ಮಕ್ಕಳು ಓದಲು ತುದಿಗಾಲಿನಲ್ಲಿ ನಿಲ್ಲುವಂತೆ, ಅವರ ವರ್ಗೀಕರಣ ಸಾಮರ್ಥ್ಯವು ಬೆಳೆಯುವಂತೆ ಸಹ ಅಗುತ್ತದೆ.

**ಆಂಗ್ಲವರ್ಣಮಾಲೆಗೆ ಚಿತ್ರಗಳು**

ಚಿತ್ರ 2: ಆಂಗ್ಲ ವರ್ಣಮಾಲೆಗಾಗಿ ಚಿತ್ರಗಳ ರಚನೆಯಲ್ಲಿ ಮಕ್ಕಳು ನಲಿವಿನಿಂದ ಭಾಗವಹಿಸುತ್ತಿರುವುದು

ಈ ಶಿಕ್ಷಕರು ಆಂಗ್ಲವರ್ಣಮಾಲೆಯ ಅಕ್ಷರಗಳನ್ನು ಬಳಸಿಕೊಂಡು ವಿವಿಧ ವಸ್ತುಗಳನ್ನು ಬಿಡಿಸುವುದು ಮಕ್ಕಳಿಗೆ ಮುದ ನೀಡುತ್ತದೆ. ಈ ರೀತಿ ರಚಿಸಲಾದ ವಸ್ತುಗಳ ಹೆಸರುಗಳನ್ನು, ಮಕ್ಕಳು ಈ ಚಿತ್ರಗಳನ್ನು ನೋಡಿ ಪದಗಳನ್ನು ಗುರುತಿಸಲಾಗುವಂತೆ, ಹಿಂದಿ ಮತ್ತು ಆಂಗ್ಲ ಭಾಷೆಗಳಲ್ಲಿ ಸಹ ಬರೆಯುತ್ತಾರೆ. ಈ ವಿಧಾನವು ಮಕ್ಕಳು ಆಂಗ್ಲ ವರ್ಣಮಾಲೆಯನ್ನು ಹಾಗೂ ಹೊಸ ಪದಗಳನ್ನು ಕಲಿಯಲು ನೆರವಾಗುತ್ತದೆ.

**ತಾವೇ ರಚಿಸಿದ ಪದ್ಯಗಳ ಮೂಲಕ ಬೋಧನೆ**

ಮಕ್ಕಳು ತರಗತಿಯಲ್ಲಿ ಕಲಿಯುವುದನ್ನು ಮತ್ತೆ-ಮತ್ತೆ ಮಾಡದಿದ್ದರೆ ಮರೆತುಬಿಡುತ್ತಾರೆ ಎಂಬುದು ಅನಿತಾ ಗುಪ್ತಾ ಅವರ ಅನಿಸಿಕೆ. ಆದ್ದರಿಂದ, ಮಕ್ಕಳು ದಿನವೂ ಅಭ್ಯಾಸ ಮಾಡಲು ಅನುಕೂಲವಾಗುವಂತೆ ಸಣ್ಣ ಪದ್ಯಗಳನ್ನು ಅವರು ರಚಿಸಿದ್ದಾರೆ. ಬೆಳಗಿನ ಪ್ರಾರ್ಥನಾ ಸಭೆಯಲ್ಲಿ ಮಕ್ಕಳು ಈ ಪದ್ಯಗಳನ್ನು ಹಾವಭಾವಗಳೊಂದಿಗೆ ಹಾಡುವಂತೆ ಅವರು ನೋಡಿಕೊಳ್ಳುತ್ತಾರೆ. ಉದಾಹರಣೆಗೆ, ಪರಿಸರ ಪಾಠಕ್ಕೆ ಪೂರಕವಾದ ಸಂಚಾರಿ ನಿಯಮಗಳನ್ನು ವಿವರಿಸುವ ಈ ಪದ್ಯವೊಂದನ್ನು ರಚಿಸಿದ್ದಾರೆ:

*ಇಲ್ಲೆ ನಿಲ್ಲಿ! ಎಂದು ಎಚ್ಚರಿಸುತಿದೆ ಕೆಂಪು ದೀಪ*

*ಕೂಡಲೇ ನಿಲ್ಲುವೆವು ನಾವು ಬೇರೆಲ್ಲ ಮರೆತು.*

*ನಿಧಾನವಾಗಿ ಚಲಿಸಲು ಸಿದ್ಧರೇ? ಕೇಳುತಿದೆ ಹಳದಿ ದೀಪ*

*ಅದ ನೋಡಿ ನಾವು ಅಣಿಯಾಗುವೆವು ತ್ವರಿತ.*

*ಹೇಳುವುದಾದರೂ ಏನನ್ನು ಹಸಿರು ದೀಪ?*

*ಹೊರಡಿ, ತ್ವರೆಮಾಡಿ ಎಂದು ಎಚ್ಚರಿಸುತಿದೆ.*

ಎಣಿಕೆ:

*ಹಕ್ಕಿಗಳು ಹಾರುತಿವೆ, ಹಕ್ಕಿಗಳು ಉಲಿಯುತ್ತಿವೆ.*
*ಐದು ಪುಟ್ಟ ಹಕ್ಕಿಗಳು ಕಾರೊಂದನು ಓಡಿಸುತ್ತಿವೆ.*
*ಒಂದು ಹಾರಿಹೋಯಿತು; ಉಳಿದವು ನಾಕೇ ನಾಕು.*
*ನಾಕು ಪುಟ್ಟ ಹಕ್ಕಿಗಳು ಕೊಳಲ ನುಡಿಸುತಿವೆ.*
*ಒಂದು ಹಾರಿಹೋಯಿತು; ಈಗಿವೆ ಮೂರೇ ಮೂರು.*
*ಮೂರು ಪುಟ್ಟ ಹಕ್ಕಿಗಳು ರಾಗಿ ಬಿತ್ತುತಲಿದ್ದವು.*
*ಒಂದು ಹಾರಿಹೋಯಿತು; ಈಗಿವೆ ಎರಡೇ ಎರಡು.*
*ಎರಡು ಪುಟ್ಟ ಹಕ್ಕಿಗಳು ಕಜ್ಜಾಯ ತಿನ್ನುತಲಿದ್ದವು.*
*ಒಂದು ಹಾರಿಹೋದರೆ, ಉಳಿವುದೊಂದೇ ಒಂದು.*
*ಆ ಒಂದು ಪುಟ್ಟ ಹಕ್ಕಿ ಹೆಸರುವಾಸಿಯಾಯಿತು.*
*ಅದೂ ಹಾರಿಹೋಯಿತು; ಈಗ ಉಳಿಯಿತು ಸೊನ್ನೆ.*

ನಾಮಪದ, ಸರ್ವನಾಮ, ಕ್ರಿಯಾಪದ ಮತ್ತು ವಿಶೇಷಣ:

*ನಾನು ನಿಮಗೆ ಹಿಂದಿ ವ್ಯಾಕರಣವ ಪರಿಚಯಿಸುವೆ.*

*ನಾಮ ಮತ್ತು ಕ್ರಿಯಾಪದಗಳ, ಸರ್ವನಾಮ, ವಿಶೇಷಣಗಳ ವಿವರಿಸುವೆ..*

*ಹೆಸರಿಸುವ ಪದಗಳನೆ ನಾವು ಅನ್ನುವೆವು ನಾಮಪದವೆಂದು.*

*ರಾಧಾ ಅಥವಾ ಮೋಹನ್, ಅದು ವ್ಯಕ್ತಿ, ವಸ್ತು ಅಥವಾ ಸ್ಥಳದ ಹೆಸರ ಹೇಳುವುದು.*

*ಸರ್ವನಾಮವು ಆ ನಾಮಪದಗಳ ಎಡೆಯಲ್ಲಿ ಬರುವುದು –*
*ನಾನು, ನೀನು, ಇದು, ಅದು, ಅವಳು, ಇವಳು, ಎಲ್ಲವೂ.*
*ತಾಯಿಯಂತೆ, ಶಿಕ್ಷಕರಂತೆ ಕ್ರಿಯಾಪದಗಳು ಕೆಲಸ ಮಾಡಿಸುವವು*
*ಓದುವ, ಬರೆಯುವ, ಆಡುವ, ಕುಣಿಯುವ ಕ್ರಿಯೆಗಳ ತಿಳಿಸುವವು.*
*ನಾಮಪದಗಳ ಗುಣವನು ತಿಳಿಸುವುದೇ ವಿಶೇಷಣವು,*
*ಹೊಸತು ಮತ್ತು ಹಳತರ, ಒಳ್ಳೆಯ ಮತ್ತು ಕೆಟ್ಟದರ*
*ನಡುವಿನ ವ್ಯತ್ಯಾಸವ ತಿಳಿಸುವವು.*

*ಹಿಂದಿ ವ್ಯಾಕರಣ...*

ಪರ್ಯಾಯಪದಗಳು:

*ಈಶ್ವರ, ಪ್ರಭು, ಸ್ವಾಮಿ, ಪರಮೇಶ್ವರ, ಭಗವಾನ್*
*ಕಂದ, ವತ್ಸ, ತನಯ, ಸುತ ಮತ್ತು ನಂದನ*
*ಅರ್ಥವೊಂದೇ ನಾಮ ಹಲವು.*
*ಮೋಡ, ಮೇಘ, ಪಯೋಧ, ಪಯೋಧರ*
*ಪರ್ವತ, ಬೆಟ್ಟ, ಶೈಲ ಮತ್ತು ಗುಡ್ಡ*
*ದುಂಬಿ, ಆಲಿ, ಭೃಂಗ, ಮಧುಕರ*
*ಹಾವು, ನಾಗ, ಅಹಿ, ಸರ್ಪ, ಭುಜಂಗ,*
*ರಾತ್ರಿ, ಇರುಳು, ನಿಶಾ, ಯಾಮಿನಿ*
*ಮಿಂಚು, ವಿದ್ಯುತ್, ದಾಮಿನಿ, ಚಂಚಲಾ*
*ಅಮ್ಮ, ಮಾತಾ, ತಾಯಿ*
*ಧಾರಿಣಿ, ಲಲನೆ, ನಾರಿ, ರಮಣಿ.*

ಈ ರೀತಿಯ ಮೋಜಿನ ವಿಧಾನವನ್ನು ಅಳವಡಿಸಿಕೊಳ್ಳುವುದರಿಂದ ವಿದ್ಯಾರ್ಥಿಗಳು ಪಠ್ಯಪುಸ್ತಕದ ವಿಷಯದೊಂದಿಗೆ ಶಿಕ್ಷಕರು ಬೋಧಿಸುವುದನ್ನು ಸಹ ಅರ್ಥಮಾಡಿಕೊಳ್ಳಲು ಸುಲಭವಾಗುತ್ತದೆ. ಅನಿತಾ ಗುಪ್ತಾ ಅವರು ತಮ್ಮದೇ ಕವನಗಳ ಜೊತೆಗೆ ಬೋಧನೆ-ಕಲಿಕೆ ಪ್ರಕ್ರಿಯೆಗೆ ಪೂರಕವಾಗಿ ಹಲವು ಚಟುವಟಿಕೆಗಳನ್ನು ಅಳವಡಿಸಿಕೊಳ್ಳುತ್ತಾರೆ. ಇದರಿಂದ ಮಕ್ಕಳು ಇನ್ನೂ ಉತ್ತಮವಾಗಿ ಪಠ್ಯವಿಷಯವನ್ನು ಗ್ರಹಿಸುವಂತಾಗುತ್ತದೆ. ಇದರಿಂದ ಮಕ್ಕಳು ಓದಲು ಆಸಕ್ತಿ ತೋರುವರಲ್ಲದೆ, ಅವರ ಕಲಿಕೆಯೂ ಸುಧಾರಿಸುತ್ತದೆ.

**ಪ್ರಿಯಾ ಜಯಸ್ವಾಲ್** ಅವರು ದೆಹರಾದೂನ್ ಅಜೀಂ ಪ್ರೇಮ್‌ಜಿ ಫೌಂಡೇಶನ್ನಿನ ಜಿಲ್ಲಾ ಸಂಸ್ಥೆಯಲ್ಲಿ ಪರಿಸರ ಮತ್ತು ಸಮಾಜವಿಜ್ಞಾನಗಳ ಸಂಪನ್ಮೂಲ ವ್ಯಕ್ತಿಯಾಗಿ ಕೆಲಸ ನಿರ್ವಹಿಸುತ್ತಿದ್ದಾರೆ. ಒಂದು ದಶಕಕ್ಕೂ ಮೀರಿ ಇವರು ಫೌಂಡೇಶನ್ನಿನೊಂದಿಗೆ ಕೈಜೋಡಿಸಿದ್ದು, ಶಿಕ್ಷಕರ ಸಾಮರ್ಥ್ಯ ವಿಕಾಸ ಕಾರ್ಯಕ್ರಮ (ಸೇವಾನಿರತ, ಸೇವಾಪೂರ್ವ ಶಿಕ್ಷಕ ಶಿಕ್ಷಣದ), ಪಠ್ಯಕ್ರಮ ರಚನೆ ಹಾಗೂ ಪಠ್ಯ ಸಾಮಗ್ರಿಗಳ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಭಾಗಿಯಾಗಿರುವುದಷ್ಟೇ ಅಲ್ಲದೆ, ಇನ್ನೂ ಹಲವು ರೀತಿಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇವರನ್ನು ಸಂಪರ್ಕಿಸಬಹುದಾದ ವಿಳಾಸ: priya.jaiswal@azimpremjifoundation.org

============